ಕೆ.ವೆಂ. ರಾಜಗೋಪಾಲ*

# ಪಂಪನ ಚಾಗದಕಂಬ ಶಾಸನ

'ಸಂಸ್ಕೃತಕ್ಕೆ ಕಾಳಿದಾಸನು ಹೇಗೋ ಕನ್ನಡಕ್ಕೆ ಪಂಪನು ಹಾಗೆ' ಎಂದು ತೀ ನಂಶ್ರೀ. ಅಭಿಪ್ರಾಯ ಪಟ್ಟಿರುತ್ತಾರೆ. ಇಂಥ ಕವಿಯ ಇತಿವೃತದ ಬಗ್ಗೆ ಶೋಧವು ನಡೆಯುತ್ತಲೇ ಇದೆ. ಈ ಹಿನ್ನೆಲೆಯಲ್ಲಿ ಆಂಧ್ರ ಪ್ರದೇಶದಲ್ಲಿ ದೊರೆತಿರುವ ೨-೩ ಶಾಸನಗಳ ಬಗ್ಗೆ ವಿದ್ವಾಂಸರ ಗಮನ ಸೆಳೆಯುತ್ತಾ ಅವುಗಳು ದೊರಕುವ ಸ್ಥಳ ಮತ್ತು ಅವುಗಳನ್ನು ಮೊದಲು ಗುರುತಿಸಿದ ವಿದ್ವಾಂಸರ ಬಳಿ ಸಂವಾದಕ್ಕೆ ಪ್ರಯತ್ನಿಸಿದ್ದೇನೆ. ಪಂಪನು 'ವೆರಿಗಿಪಳು' ವಿನಲ್ಲಿ ರಾಷ್ಟ್ರಕೂಟ ಕೃಷ್ಣನ ಆಶ್ರಯದಲ್ಲಿ ಸಾಮಂತನಾಗಿದ್ದ ಚಾಲುಕ್ಯ ಅರಿಕೇಸರಿ IIಯ ಆಸ್ಥಾನದಲ್ಲಿದ್ದವನೂ ಆತನ ಆತ್ಮೀಯನೂ ಆಗಿದ್ದನೆಂಬುದು ಕಾವ್ಯಗಳಿಂದಲೇ ತಿಳಿದು ಬರುತ್ತಿದೆ. ಆದರೆ ಆತನೇ ಬರೆದನೆಂಬುದಕ್ಕೆ ಆಂಧ್ರಪ್ರದೇಶದ ಕರೀಂನಗರದಲ್ಲಿ ಒಂದು ಶಾಸನವು ಸೂಚನೆ ನೀಡುತ್ತದೆ.

ಕರೀಂನಗರದ ಮ್ಯೂಸಿಯಂನಲ್ಲಿ ರಕ್ಷಿತವಾಗಿರುವ ಒಂದನೆಯ ಸಂಖ್ಯೆಯ ಶಾಸನವನ್ನು ಕೆಲವು ವರ್ಷಗಳ ಹಿಂದೆ ಹೈದರಾಬಾದಿನ ಆರ್ಕಿಯಾಲಜಿ ಸಂಸ್ಥೆಯವರು ಬೆಳಕಿಗೆ ತಂದಿದ್ದರೂ ಅದರ ಸರಿಯಾದ ಪರಿಶೀಲನೆಯಾಗಲಿ ಪಂಪನಿಗೂ ಅದಕ್ಕೂ ಇದ್ದ ನಿಕಟ ಸಂಬಂಧವಾಗಲಿ ಬೆಳಕಿಗೆ ಬಂದಿರುವುದಿಲ್ಲ. ಇದನ್ನು ಮೊದಲು ಓದಿದವರು ಕನ್ನಡವನ್ನು ಅರಿತವರಲ್ಲ. ಆದಕಾರಣ ಅದರ ಓದುವಿಕೆಗೆ ತಪ್ಪುಗಳು. ಸೇರಿಕೊಂಡುವು ಇದನ್ನು ಶ್ರೀ ಸೀತಾರಾಮ ಜಾಗೀರ್‌ದಾರ್ ಅವರು ತಮ್ಮ 'ಸಾಪೇಕ್ಷ' ಎಂಬ ಗ್ರಂಥದಲ್ಲಿ ಪ್ರಸ್ತಾಪಿಸಿದ್ದಾರೆ. ಈ ಕೃತಿಯು ಪಂಪನನ್ನು ಕುರಿತ ಹೊಸ ಶೋಧನೆಗಳನ್ನೆಲ್ಲಾ ವಿಮರ್ಶೆಗೆ ಒಳಪಡಿಸಿರುತ್ತದೆ. ಆದರೂ ಅವರ ಪರಿಶೀಲನೆಯು ವಿದ್ವಾಂಸರಿಗೆ ಒಪ್ಪಿಗೆಯಾಗಿರುವುದಿಲ್ಲ. ಏಕೆಂದರೆ ಅವರ ಊಹೆಗಳು ನಿರಾಧಿಕವಾಗಿರುತ್ತವೆ. ಇಂತಹ ಸ್ಥಿತಿಯಲ್ಲಿ ನಾನು ಕಳೆದ ನವಂಬರ್ ತಿಂಗಳು ಕೊನೆಯ ವಾರದಲ್ಲಿ ಕರೀಂನಗರಕ್ಕೆ ಭೇಟಿ ಕೊಟ್ಟು 'ಪಂಪನ ಶಾಸನ'ವನ್ನು ಗುರುತಿಸಿದ್ದೇನೆ. ಅದರಲ್ಲಿ 'ಶ್ರೀ ಪಂಪಂ ಬರೆದೊಂ ಎಂಬ ಒಕ್ಕಣೆಯನ್ನು ಸರಿಯಾಗಿ ಓದಿದುದಲ್ಲದೆ ಮೊದಲು ಅದನ್ನು ಓದಿದ ಪಾಠಕ್ಕೆ ತಿದ್ದುಪಡಿಯನ್ನು ತೋರಿಸಿಬಂದಿದ್ದೇನೆ.

ಪಂಪನು ಎರಡು ಮಹತ್ವದ ಕಾವ್ಯಗಳನ್ನು ಬರೆದಿರುವುದಲ್ಲದೆ 'ಶಾಸನ ಕವಿ'ಯು ಆಗಿರುವುದೇ ಈಗಿನ ವಿಶೇಷವಾಗಿದೆ. ಇದರಿಂದ ಆತನ'ವಿಕ್ರಮಾರ್ಜುನ ವಿಜಯಂ' ಕಾವ್ಯದ ಕಾಲವನ್ನು ಗುರುತಿಸಲು ಸಾಧ್ಯವಾಗಿರುತ್ತದೆ. ಈ ಶಾಸನದ ಮತ್ತೊಂದು ಮಹತ್ವವೆಂದರೆ ಇದನ್ನು 'ಚಾಗದಕಂಭ' ಎಂದು ಕರೆದಿರುವುದೂ ಅಲ್ಲದೆ, ಈ ಶಾಸನದ ಸೂಚನೆಯ ಮೇರೆಗೆ ಮತ್ತೆರಡು ಇಂಥ ಶಾಸನಗಳು ಇದ್ದಿರಬಹುದು. ಅವು ಅರಿಕೇಸರಿಯ ಪೂರ್ವಜರಿಗೆ ಸಂಬಂಧಿಸಿದುವಾಗುತ್ತವೆ. ಆದುದರಿಂದ ಈ ಶಾಸನವು ಐತಿಹಾಸಿಕವಾಗಿಯೂ ತುಂಬ ಮಹತ್ವದ್ದಾಗಿದೆ. ಇದರ ಕಾಲದ ಗುರುತನ್ನು ಶಾಸನವೇ ತಿಳಿಸುವಂತೆ ಕ್ರಿ.ಶ. ೯೪೬ಕ್ಕೆ ಸರಿಹೋಗುತ್ತದೆ. ಆದುದರಿಂದ ಪಂಪನ ವಿಕ್ರಮಾರ್ಜುನ ವಿಜಯಂ-ಕಾವ್ಯವೂ ಇದೇ ವರ್ಷದ ಕಾರ್ತೀಕ ಮಾಸಕ್ಕೆ ಸಂಬಂಧಿಸಿದ ವನ ಭೋಜನ-ಉತ್ಸವಕ್ಕೆ ಸೇರುವಂಥದೆಂದರೆ ಆಶ್ಚರ್ಯವಿಲ್ಲ.

* ಎಂ.ಐ.ಜಿ. ೪೧, ೮೦ ಅಡಿರಸ್ತೆ, ಕೆಂಗೇರಿ ಉಪನಗರ ೩ನೇ ಹಂತ, ಬೆಂಗಳೂರು–೫೬೦ ೦೫೬

**ಚಾಗದ ಕಂಭ :** ಈ ಶಾಸನವನ್ನು ಆಂಧ್ರ ಪ್ರದೇಶದ ಆರ್ಕಿಯಾಲಜಿ ಸಂಸ್ಥೆಯು 'ಜಿನವಲ್ಲಭನ ಶಾಸನ'ವನ್ನು ಪ್ರಕಟಿಸಿದಂತೆಯೇ ಬೆಳಕಿಗೆ ತಂದಿತಾದರೂ ಅದರ ವಾಸ್ತವತೆಯನ್ನು ಬೆಳಕಿಗೊಡ್ಡಲು ಸಮರ್ಥ ವಾಗಲಿಲ್ಲ. ಆದರೆ ಈ ಶಾಸನದಿಂದ ಪಂಪನ ವಿಕ್ರಮಾರ್ಜುನ ವಿಜಯಂ-ಕಾವ್ಯದ ಬಗ್ಗೆ ಇದ್ದ ಕೆಲವು ಅನುಮಾನಗಳು ಪರಿಹಾರವಾದುವು. ಪಂಪನ ತಂದೆ ಭೀಮಪಯ್ಯ ಮತ್ತು ತಾಯಿ ಅಬ್ಬಣಬ್ಬೆಯೆಂದೂ ಅವಳು ಧಾರವಾಡ ಜಿಲ್ಲೆಯ ಅಣ್ಣಿಗೆರೆಯ ಜೋಯಿಸ ಸಿಂಘನ ಮೊಮ್ಮಗಳೆಂದೂ ತಿಳಿದುಬಂದಿತು. ಇಷ್ಟೇ ಅಲ್ಲದೆ ಪಂಪನಿಗೆ ಜಿನವಲ್ಲಭನೆಂಬ ತಮ್ಮನಿದ್ದುದು ಈ (ಗಂಗಾಧರ ಶಾಸನ) ಶಾಸನದಿಂದ ಸ್ಪಷ್ಟವಾಯಿತು.

ಆದರೆ ಕರೀಂನಗರದ 'ಚಾಗದ ಕಂಭ'ದ ಶಾಸನವು ದೊರಕಿದ ಮೇಲೆ ಪಂಪನ ವಿಕ್ರಮಾರ್ಜುನ ವಿಜಯಂ ಕಾವ್ಯದಲ್ಲಿನ 'ಪ್ರವೇಶ' ಭಾಗದಲ್ಲಿ ಬಂದಿರುವ ಐದು ಪದ್ಯಗಳು ಇದರಲ್ಲಿ 'ಚಾಗದಕಂಭ' ಎಂಬ ಹೆಸರಿನಲ್ಲಿ ದಾಖಲಾಗಿರುವುದು ಕಂಡು ಬಂದಿತು. ಈ ಶಾಸನದ ಅಂತ್ಯದಲ್ಲಿ ಶ್ರೀಮಮ್ಮಮ್ಮಂ ಬರೆದೆ ಎಂದು ಗುರುತಿಸಿ ದ್ದಾರೆ. ಇಂಥ ಹೆಸರು ತೆಲುಗಿಗೂ ಹಾಗೆಯೇ ಕನ್ನಡಕ್ಕೂ ಅಸಾಧ್ಯವಾದದು. ಅದು ಅವರಿಗೆ 'ಶ್ರೀಮತ್+ಅಮ್ಮಂ' ಎಂದಿರಬಹುದೆಂದು ಅನ್ನಿಸಿದಂತೆ ತಿಳಿದು ಬಂದಿದೆ. ಜಾಗೀರ್‌ದಾರರು ಈ ಶಾಸನದ ಫೋಟೋ ಪ್ರತಿಯನ್ನು ನೋಡಿದ್ದಾರೆಯಾದರೂ ಇದು ಖಂಡಿತವಾದ ತಪ್ಪೆಂದು ಅವರಿಗೆ ಕಂಡು ಬಂದಂತಿಲ್ಲ. ಆದರೆ ನನಗೆ ಈ ಶಾಸನವನ್ನು ಓದುತ್ತಿದ್ದಂತೆಯೇ ಹುಟ್ಟಿದ ಅನುಮಾನಗಳನ್ನು ಸಾಧಾರವಾಗಿ ತಾಳೆ ಮಾಡಿ ನೋಡಿದ್ದೇನೆ. ಹಾಗೂ ಶಾಸನವನ್ನೇ ಖುದ್ದಾಗಿ ನೋಡಿ ಬಂದಿದ್ದೇನೆ. ಅದನ್ನು ತಪ್ಪಾಗಿ ಯಾದರೂ ಮೊದಲು ಓದಿದ ಅಧಿಕಾರಿಗಳನ್ನು ಕಂಡು ಮಾತಾಡಿ ನನ್ನ ಅನುಮಾನಗಳನ್ನು ಸಾದರ ಪಡಿಸಿದ್ದೇನೆ. ಈ ಶಾಸನವನ್ನು ಬರೆದವನ ಹೆಸರಿನಲ್ಲಿ ಮೊದಲ 'ಪಂ' ಎಂಬುವನ್ನು ಅವರು 'ಮಂ' ಎಂದು ಓದಿರುವುದನ್ನು ತೋರಿಸಿಕೊಟ್ಟಿದ್ದರಿಂದ ಅದರ ಸಾಧ್ಯತೆ ಯನ್ನು ಅವರು ಶಾಸನದ ಕಾಗದ ಪ್ರತಿ (ದಸ್ತಾವೇಜ)ಯನ್ನು ಮತ್ತೆ ಪರಿಶೀಲಿಸಿ 'ಸಾಧ್ಯ' ವೆಂದಿದ್ದಾರೆ. ಇಂಥ ಪರಿಶೀಲನೆಯಿಂದ ಕನ್ನಡ ಸಾಹಿತ್ಯ ಚರಿತ್ರೆಗೆ ಆದ ಲಾಭ ಅಪಾರವಾಗಿದೆ.

೧. ಪಂಪನು ಶಾಸನಕವಿಯೆಂಬುದು ಇದರಿಂದ ಸ್ಪಷ್ಟ.

೨. ಈ ಶಾಸನಕ್ಕೆ ಕಾಲದ ಗುರುತು ಮಾಡ ಲಾಗಿದೆ. ಅದರಂತೆ ಈ ಶಾಸನವು ಕ್ರಿ.ಶ. ೯೪೬ಕ್ಕೆ ತಾಳೆಯಾಗುತ್ತದೆ.

೩. ಪಂಪನು ತನ್ನ 'ಆದಿಪುರಾಣ' ಕಾವ್ಯ ವನ್ನು ಬರೆದದ್ದು ಕ್ರಿ.ಶ. ೯೪೨ರಲ್ಲೆಂಬುದನ್ನು ಆದರಲ್ಲಿರುವ ಒಕ್ಕಣೆಯಿಂದ ಖಚಿತವಾಗುತ್ತಿದೆ. ಆದುದರಿಂದ ಈಗ ವಿಕ್ರಮಾರ್ಜುನದ ಆ ಗ್ರಂಥದ ಕಾಲವನ್ನು ನಿರ್ಧರಿಸಲು ಈ ಶಾಸನವು ನೆರವಾಗುತ್ತದೆ. ಅಂದರೆ ಕ್ರಿ.ಶ. ೯೪೬ರಲ್ಲಿ ಕೇವಲ ಮೂರು ತಿಂಗಳಲ್ಲಿ ರಚಿಸಿದ ಕೃತಿಯೆಂದೂ ವಿಕ್ರಮಾರ್ಜುನ ವಿಜಯಂ ಕಾವ್ಯವನ್ನು ಗುರುತಿಸಲು ಯಾವುದೇ ಅನುಮಾನವೇ ಬೇಕಾದುದಿಲ್ಲ.

೪. ಗಂಗಾಧರಂನ 'ಜಿನವಲ್ಲಭನ ಶಾಸನ'ದ ಕಾಲವನ್ನು ವಿದ್ವಾಂಸರು ಗುರುತಿಸುವಂತೆ ಕ್ರಿ.ಶ. ೯೫೦ ಮತ್ತು ೯೬೦ರ ನಡುವೆ ಎಂದು ಒಪ್ಪಿಕೊಳ್ಳುವುದು ಸರಿಯಾಗುತ್ತದೆ. ಅಂದರೆ ಪಂಪನು ಈ ಜಿನವಲ್ಲಭನ ಶಾಸನದ ವೇಳೆಗೇ 'ಮುಡಿಪಿ'ರಬಹುದು. ಆದುದರಿಂದ ಜಿನವಲ್ಲಭನ ಶಾಸನವನ್ನು ಪಂಪನ 'ನಿಸದಿಗೆ ಶಾಸನ' ವೆಂದು ಕರೆದರು ಸರಿಯಾದೀತು. ಒಟ್ಟಿನಲ್ಲಿ ಸುಮಾರು ಕ್ರಿ.ಶ. ೯೫೦ರ ಮತ್ತು ೯೬೦ರ ನಡುವೆ ಆತನು ತೀರಿ ಕೊಂಡಿರಬಹುದು.

೫. ಉಳಿದ ವಿಚಾರಗಳು ಪಂಪನನ್ನು ಕುರಿತಂತೆ ಶೋಧವಾಗಬೇಕಾದುದಿದೆ-ಅದಕ್ಕೆ ಮುಂದೆ ಕರೀಂನಗರ ಜಿಲ್ಲೆಯಲ್ಲಿ ಅಡಗಿರಬಹುದಾದ ಶಾಸನ ಗಳಿಗಾಗಿ ಕಾದುನೋಡಬೇಕು.

ಒಂದು ಐತಿಹಾಸಿಕ ದಾಖಲೆಯಾಗಿ-

ಈ ಶಾಸನವನ್ನು ಬರೆದವನು 'ಪಂಪ'ನೆನ್ನುವಾಗ 'ಶ್ರೀ ಪಂಪ್ಪಂ ಬರೆದೊಂ' ಎಂದು ಸರಿಯಾಗಿ ಓದಲೇ ಬೇಕಾಗಿದೆ. ಇದು ಹತ್ತನೆಯ ಶತಮಾನದ ಕನ್ನಡದ

ರೂಪ. ಇದರ ಮೊದಲ ಭಾಗದಲ್ಲಿ ಯುದ್ಧಮಲ್ಲ–ನರಸಿಂಹ–ಮತ್ತು ಎರಡನೇ ಅರಿಕೇಸರಿ–ಇವರ ಪರವಾದ 'ಚಾಗದ' ಒಕ್ಕಣೆಯಿದಾಗಿದೆ. ಇದೊಂದು ವಿಶಿಷ್ಟ ದಾನಶಾಸನವಾಗಿದೆ. ವಾಸ್ತವವಾಗಿ ಎರಡನೆಯ ಅರಿಕೇಸರಿಯು ಪೌದನಪುರದಲ್ಲಿ ಪಟ್ಟಾಭಿಷಿಕ್ತನಾಗಿ ತನ್ನ ಹಿರಿಯರ ರಾಜ್ಯವನ್ನು ಆಳುತ್ತಿದ್ದವನು ಸಾಮಂತಾಧಿಪತಿಯೂ ಹೌದು. ಇವನ ಆಳ್ವಿಕೆಗೆ ಕರೀಂನಗರ ಜಿಲ್ಲೆಯು ಸೇರಿದ್ದಿತು–ಎಂಬುದನ್ನು ಈತನಿಗೆ ಸಂಬಂಧಿಸಿದ ಉಳಿದ ಶಾಸನಗಳಿಂದಲೂ ಅವು ಸಧ್ಯಕ್ಕೆ ಕರೀಂನಗರ ಜಿಲ್ಲೆಯಲ್ಲಿ ಕಂಡು ಬಂದಿವೆ–ಎಂಬುದರಿಂದಲೂ ಗುರುತಿಸಬಹುದು. ಅಂತೆಯೇ ರಾಷ್ಟ್ರಕೂಟ ಮೂರನೇ ಕೃಷ್ಣನ ಅಧೀನ ರಾಜನೂ ಆಪ್ತನೂ ಆಗಿದ್ದವನೆಂದು ಅರಿಕೇಸರಿಯನ್ನು ಗುರುತಿಸಬಹುದು. ತಾನೇ ಅಧೀನ ರಾಜನಾದುದರಿಂದ 'ಪಂಪ'ನಿಗೆ 'ಕವಿಚಕ್ರವರ್ತಿ' ಎಂಬ ಬಿರುದನ್ನು ಕೊಡಲು ಸಮರ್ಥನಾಗಲಿಲ್ಲ–ಎಂಬುದು ವಿದ್ವಾಂಸರ ಮತವಾಗಿದೆ. ಆದರೂ 'ಪಂಪ'ನ ಕಾವ್ಯಕ್ಕೆ ರನ್ನ-ಜನ್ನ ಮೊದಲಾದವರು ತಲೆ ಬಾಗಿರುತ್ತಾರೆ ಮತ್ತು ಹೊಗಳಿ ಗೌರವಿಸಿದ್ದಾರೆ. ಅಲ್ಲದೆ ನಾಗಚಂದ್ರನಿಗೆ 'ಅಭಿನವ ಪಂಪ' ಎಂಬ ಬಿರುಕು ಸಂದಿರುವುದರಿಂದ ಪಂಪನ ಹಿರಿಮೆಯು ಸ್ಪಷ್ಟವೂ ಆದುದಾಗಿದೆ.

ಪಂಪನು ತನ್ನ ಆಶ್ರಯ ದಾತನಾಗಿದ್ದ ಎರಡನೇ ಅರಿಕೇಸರಿಯ ವಂಶಾವಳಿಯನ್ನು ಹಿರಿಮೆ ಗರಿಮೆಗಳನ್ನು ಹೊಗಳಿದ್ದಾನೆ. ಈ ಚಾಗದ ಕಂಬದ ಶಾಸನದ ವೇಳೆಗಾಗಲೇ ಎರಡನೇ ಅರಿಕೇಸರಿಯು 'ಗುಣಾರ್ಣವ'ನು 'ಪ್ರಿಯಗಳ್ಳ'ನೂ ಆಗಿದ್ದನೆಂಬುದನ್ನು ಈ ಶಾಸನವು ಹೇಳುತ್ತದೆ. ಇವೆರಡೂ ಬಿರುದುಗಳು ಸೇರಿರುವುದನ್ನು ವೇಮುಲವಾಡದ ಶಾಸನವು ಹೇಳುತ್ತದೆ. ಇದೂ ಕಂಭ ಶಾಸನವೇ ಆಗಿದೆ. ಇದನ್ನು ಎರಡನೇ ಅರಿಕೇಸರಿಯೂ 'ವೆಂಬುಳವಾಟಿಕ'ದಲ್ಲಿ ತನ್ನ ಹಿರಿಯರು ಕಟ್ಟಿಸಿದ್ದ ದೇಗುಲಗಳನ್ನು ರಕ್ಷಿಸುವುದಕ್ಕೆನ್ನುವಂತೆ ನಿಜಿಸಿದ್ದಾನೆ. ಆದರೆ ಇದರಲ್ಲಿ ಪಂಪನ ಹೆಸರಾಗಲಿ ಪಂಪ ಭಾರತದ ಪದ್ಯ ಭಾಗಗಳಾಗಲಿ ಇಲ್ಲ ಈ ಶಾಸನವು ಸಂಸ್ಕೃತದಲ್ಲಿದ್ದರೂ ೭೧ ರಿಂದ ೮೫ರ ವರೆಗೆ ಕನ್ನಡ ವಾಕ್ಯ ರಚನೆಯಿದ್ದು–ಕೊನೆಯ ಕ್ರಿಯಾ ಪದಭಾಗದಲ್ಲಿ ಸಮಸ್ತ ಶಾಸ್ತ್ರ ಪಾರಗಂ ಶ್ರೀ ಮತ್ಸಂಧಿವಿಗ್ರಹಿ ಗುಣಾಂಕುಶೇನ.... ಎಂದು ಕಂಡು ಬರುವ ಜಾಣತನವಿದೆ. ಮತ್ತೊಂದು ಅಂಶವೆಂದರೆ ಇದರ ಲಿಪಿಯೂ ಪ್ರಾದೇಶಿಕ ಸಾಮಾನ್ಯ ಲಿಪಿಯಾಗಿದೆ. ಇದರ ಜೊತೆಗೆ ನಾವು ಜಿನವಲ್ಲಭನ ಕುರಿಕ್ಯಾಲಂ ಶಾಸನವೂ ಹೀಗೆಯೇ ಇರುವುದನ್ನು ಗಮನಿಸಬಹುದು. ಆದುದರಿಂದ ಈ ಶಾಸನವನ್ನು ಪಂಪನ ಪೂರ್ವ ಶಾಸನವೆಂದು ಪರಿಗಣಿಸಬೇಕಾದೀತು. ಎಕೆಂದರೆ ಗುಣಾರ್ಣವಂ ಮತ್ತು ಪ್ರಿಯಗಳ್ಳಂ–ಈ ಹೊಗಳಿಕೆಗಳು ಪಂಪನದೆನ್ನುವ 'ಚಾಗದಕಂಭ'ದಲ್ಲೂ ಆತನ ವಿಕ್ರಮಾರ್ಜುನ ವಿಜಯಂ ಕಾವ್ಯ ಪ್ರವೇಶದಲ್ಲೂ ಕಾಣಬಹುದಾಗಿವೆ. ಪಂಪನು 'ವಿಕ್ರಮಾರ್ಜುನ ವಿಜಯಂ'-ಕಾವ್ಯದಲ್ಲಿ 'ಚಾಗದಕಂಬಮಂ ನಿಜಿಸಿ'ದ ನಾಯಕನೆಂದೇ ಹೇಳಿದ್ದಾನೆ. ಆದುದರಿಂದ ಈ ಶಾಸನದ ಮಹತ್ವವು ವಿಕ್ರಮಾರ್ಜುನ ವಿಜಯಂ ಕಾವ್ಯದ ೧೪ನೇ ಆಶ್ವಾಸದ ಪದ್ಯಗಳಿಂದಲೂ ಖಚಿತವಾಗುತ್ತದೆ.

ಎರಡನೇ ಅರಿಕೇಸರಿಯು ತನ್ನ ರಾಜಧಾನಿಯಾದ ಪೌದನದಲ್ಲಿ (ಬೋಧನ) ಪಟ್ಟಾಭಿಷಿಕ್ತನಾದ ಗುರುತಾಗಿ 'ಗೋದಾನ ಭೂದಾನ ಸುವರ್ಣದಾನ'ಗಳನ್ನು ಯಥೇಚ್ಛವಾಗಿ ಮಾಡಿದ ಮೇಲೆ ಈ 'ಚಾಗದಕಂಭ'ವನ್ನು ನಿಜಿಸಿರುವುದು ಮಹತ್ವದ ವಿಷಯವೂ ಆಗಿದೆ. ಆದುದರಿಂದ, ಎರಡನೆಯ ಅರಿಕೇಸರಿಯು ತನ್ನ ಪಟ್ಟಾಭಿಷೇಕದ ಸಂದರ್ಭದಲ್ಲಿ 'ಚಾಗದಕಂಬ'ದ ಶಾಸನ ಮಾಡಿಸಿದ್ದಿರಬೇಕು–ಇದು ಒಂದು ಸಂಪ್ರದಾಯವಾಗಿದ್ದಲ್ಲಿ ಇನ್ನು ಕೆಲವು (ಎರಡಾದರೂ) ಶಾಸನಗಳು ದೊರಕಬಹುದಾಗಿದೆ. ಪಂಪನು ತನ್ನ 'ವಿಕ್ರಮಾರ್ಜುನ ವಿಜಯಂ' ಕೃತಿಯಲ್ಲಿ ಬದ್ದೆಗ ಮೊದಲಾದವರನ್ನು ಹೊಗಳಿರುವ ರೀತಿಯಿಂದ ಇಂಥ ಅನುಮಾನಕ್ಕೆ ಅವಕಾಶವಿದೆ.

ಇಂಥ ಸಂಪ್ರದಾಯವು ಮುಂದೆ ಕಲ್ಯಾಣಿ ಚಾಲುಕ್ಯರ ಸಂಪ್ರದಾಯದಲ್ಲಿ ಸೇರಿರಬಹುದಾಗಿ–ಅವರು ಬಾಗದಕಂಬ' ಎಂಬುದನ್ನು ಬೇರೆಯಾಗಿಯೇ ಕರೆದಿರಬಹುದು. ಭೂಲೋಕಮಲ್ಲ ಸೋಮೇಶ್ವರ III ಕ್ರಿ.ಶ.

೧೧೨೫-ಈತನು ತನ್ನ ಕೊಲನುಪಾಕದ ಶಾಸನದಲ್ಲಿ ಕೀರ್ತಿಸ್ತಂಭ – ಜಯಸ್ತಂಭ – ಮಾನಸ್ತಂಭ – ಎಂಬ ಮೂರು ಹೆಮ್ಮೆಗಳನ್ನು ಒಂದೇ ಶಾಸನದಲ್ಲಿ ಹೊಗಳಿಸಿ ಕೊಂಡಿದ್ದಾನೆ. ಇದು ಎರಡನೆಯ ಅರಿಕೇಸರಿಯ ವೆಂಬುಳವಾಟಿಕದ ದಾನ ಶಾಸನದಂತೆಯೇ ಇರುವುದನ್ನು ಮರೆಯುವಂತಿಲ್ಲ.

ಉಪಸಂಹಾರ–ಒಟ್ಟಿನಲ್ಲಿ ಪಂಪನು ಕನ್ನಡದಲ್ಲಿ 'ಕಾಳಿದಾಸ'ನೆನ್ನುವಂತೆ ಹೆಸರಾಂತವನೂ ಆಗಿದ್ದ 'ಮಹಾಕವಿ'ಯು ಶಾಸನ ಕವಿಯೂ ಆಗಿದ್ದುದಕ್ಕೆ 'ಶ್ರೀ ಪಂಪ್ಪಂಬರೆದೊಂ' ಎಂಬುದು ಆತನ ಕೈ ಬರೆಹದಷ್ಟೇ-ಒಂದು ದಾಖಲೆಯಾಗಿರುತ್ತದೆ.